ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ :634(668)
ಸದಸ್ಯರ ಹೆಸರು : ಶ್ರೀ ಬಿ.ಜಿ ಪಾಟೀಲ್
ಉತ್ತರಿಸುವ ದಿನಾಂಕ : 22.02.2022
ಉತ್ತರಿಸುವ ಸಚಿವರು : ಮಾನ್ಯ ನಗರಾಭಿವೃದ್ಧಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಮಹಾನಗರಪಾಲಿಕೆಯಲ್ಲಿ ಇರುವ ಒಟ್ಟು ಪೌರಕಾರ್ಮಿಕರ ಸಂಖ್ಯೆ ಎಷ್ಟು; (ವಿವರ ನೀಡುವುದು) | ಕಲಬುರಗಿ ಮಹಾನಗರ ಪಾಲಿಕೆಯಲ್ಲಿ ಘನ ತ್ಯಾಜ್ಯ ನಿರ್ವಹಣೆಗೆ ಕೆಳಕಂಡಂತೆ ಪ್ರಸ್ತುತ 1044 ಪೌರಕಾರ್ಮಿಕರು ಕರ್ತವ್ಯ ನಿರ್ವಹಿಸುತ್ತಿರುತ್ತಾರೆ.<br>**ಪೌರಕಾರ್ಮಿಕರು** – **ಸಂಖ್ಯೆ**<br>ಖಾಯಂ – 107<br>ಹೊರಗುತ್ತಿಗೆ – 937<br>ಒಟ್ಟು – 1044 |
| ಆ) | ಕಲಬುರಗಿ ಮಹಾನಗರಪಾಲಿಕೆ ವ್ಯಾಪ್ತಿಯಲ್ಲಿ ಬೆಳೆಯುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ಪೌರಕಾರ್ಮಿಕರು ಇಲ್ಲದಿರುವುದು ಹಾಗೂ ಸ್ವಚ್ಛತಾ ವಾಹನಗಳ ಅವಶ್ಯಕತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಹೌದು |
| ಇ) | ಬಂದಿದ್ದಲ್ಲಿ, ಪೌರ ಕಾರ್ಮಿಕರ ನೇಮಕಾತಿ ಮತ್ತು ಸ್ವಚ್ಛತಾ ವಾಹನಗಳನ್ನು ಪೂರೈಸಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು). | ಸರ್ಕಾರದ ಆದೇಶ ಸಂ.ನಅಇ/129/ಎಮ್.ಎನ್.ಇ./2017 ದಿನಾಂಕ:05.12.2017 ರಲ್ಲಿ ಪ್ರತಿ 700 ಜನ ಸಂಖ್ಯೆಗೆ ಒಬ್ಬರಂತೆ ಪೌರಕಾರ್ಮಿಕರನ್ನು ನೇಮಕಾತಿ ಮಾಡುವ ಸಂಬಂಧ ರಾಜ್ಯದ ಮಹಾನಗರಪಾಲಿಕೆಗಳ (ಬಿಬಿಎಂಪಿ ಹೊರತುಪಡಿಸಿ) ಪೌರ ಕಾರ್ಮಿಕರುಗಳ ನೇಮಕಾತಿ ನಿಯಮಗಳನ್ನು ರಚಿಸಲಾಗಿರುತ್ತದೆ. ತತ್ಸಂಬಂಧದಲ್ಲಿ ಕ್ರಮವಹಿಸಿ ನೇಮಕಾತಿ ಪ್ರಕ್ರಿಯೆಯನ್ನು ಪೂರ್ಣಗೊಳಿಸಲು ಸೂಚಿಸಲಾಗಿರುತ್ತದೆ.<br>ಕಲಬುರ್ಗಿ ಮಹಾನಗರಪಾಲಿಕೆ ಪೌರಕಾರ್ಮಿಕರ ವಿಶೇಷ ನೇರ ನೇಮಕಾತಿ ಸಂಬಂಧ ಜಿಲ್ಲಾಧಿಕಾರಿಗಳು ಅಧಿಸೂಚನೆ ಹೊರಡಿಸಿದ್ದು, ನೇಮಕಾತಿ ಪ್ರಾಧಿಕಾರವು ಅಧಿಕೃತ ಜ್ಞಾಪನ ಸಂ:ಜಿನಕೋ/ಸಿಬ್ಬಂದಿ-2/234/2017-18/26 ದಿನಾಂಕ: 06.04.2021 ರಂತೆ ಅರ್ಹ ಅಭ್ಯರ್ಥಿಗಳ ತಾತ್ಕಾಲಿಕ ಪಟ್ಟಿಯನ್ನು ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಚುರಪಡಿಸಲಾಗಿರುತ್ತದೆ.<br>ಸದರಿ ತಾತ್ಕಾಲಿಕ ಪಟ್ಟಿಗೆ ಆಕ್ಷೇಪಣೆಗಳು ಸಲ್ಲಿಕೆಯಾಗಿರುತ್ತವೆ. ಸದರಿ ಪ್ರಕರಣವು ರಿಟ್ ಪಿಟಿಷನ್ ಸಂ: WP NO:201515/2021 ರಂತೆ ಮುಖ್ಯ ನ್ಯಾಯಾಲಯದ ಹಂತದಲ್ಲಿರುತ್ತದೆ. ಮುಂದುವರೆದು ಕಲಬುರ್ಗಿ ಮಹಾನಗರಪಾಲಿಕೆಯಲ್ಲಿನ ಪೌರಕಾರ್ಮಿಕರ ವಿಶೇಷ ನೇಮಕಾತಿಯಲ್ಲಿ ಸರ್ಕಾರದ ಮಾರ್ಗಸೂಚಿಗಳನ್ನು |

| | | |
|---|---|---|
| | | ಪಾರದರ್ಶಕವಾಗಿ ಪಾಲನೆ ಮಾಡದೇ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಹೊರಡಿಸಿರುವ ಕುರಿತು ಸ್ಪಷ್ಟ ಅಭಿಪ್ರಾಯದೊಂದಿಗೆ ವರದಿ ಸಲ್ಲಿಸಲು ಸೂಚಿಸಿದರನ್ವಯ ನಿರ್ದೇಶನಾಲಯದಿಂದ ವರದಿ ಸ್ವೀಕೃತವಾಗಿದ್ದು, ಪರಿಶೀಲನೆಯಲ್ಲಿದೆ.<br>ಮಹಾನಗರಪಾಲಿಕೆ ವ್ಯಾಪ್ತಿಯಲ್ಲಿನ ಘನತ್ಯಾಜ್ಯ ವಸ್ತುಗಳ ನಿರ್ವಹಣೆಗಾಗಿ ಪಾಲಿಕೆಯಲ್ಲಿ ಲಭ್ಯವಿದ್ದ ಮೂಲಭೂತ ಸೌಕರ್ಯಗಳನ್ನು ವಿಶ್ಲೇಷಿಸಿ ಹೆಚ್ಚುವರಿಯಾಗಿ ಅಗತ್ಯವಿರುವ ವಾಹನ ಯಂತ್ರೋಪಕರಣಗಳ ಹಾಗೂ ಸಿವಿಲ್ ಕಾಮಗಾರಿಗಳನ್ನು ಪ್ರಸ್ತಾಪಿಸಿ ಪಾಲಿಕೆಯು ಸಿದ್ಧಪಡಿಸಿದ ವಿಸ್ತೃತ ಯೋಜನಾ ವರದಿಗೆ ಸರ್ಕಾರದ ಅನುಮೋದನೆ ನೀಡಲಾಗಿರುತ್ತದೆ. ಅದರಂತೆ ತ್ಯಾಜ್ಯ ಸಂಗ್ರಹಣೆ ಹಾದೂ ಸಾಗಣೆಗಾಗಿ ಯೋಜನಾ ವರದಿಯಲ್ಲಿ ಪ್ರಸ್ತಾಪಿಸಿರುವ ವಾಹನಗಳನ್ನು ಖರೀದಿಸಲು ಟೆಂಡರ್ ಪ್ರಕಿಯೆ ಜಾರಿಯಲ್ಲಿರುತ್ತದೆ. ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |

ಕಡತ ಸಂಖ್ಯೆ:ನಅಇ 08 ಎಸಿಜಿ 2022(ಇ)

(ಬಿ.ಎ ಬಸವರಾಜ)
ನಗರಾಭಿವೃದ್ಧಿ ಇಲಾಖೆ

**(ಬಿ.ಎ. ಬಸವರಾಜ)**
**ನಗರಾಭಿವೃದ್ಧಿ ಸಚಿವರು**

## ವಿವರ

| ಕ್ರಸಂ | ಪ್ರಸ್ತುತ ಕಲಬುರಗಿ ಮಹಾನಗರ ಪಾಲಿಕೆಯಲ್ಲಿರುವ ವಾಹನಗಳ ಸಂಖ್ಯೆ | ಡಿ.ಪಿ.ಆರ್‌ನಲ್ಲಿ ಪ್ರಸ್ತಾಪಿಸಿರುವ ವಾಹನಗಳ ಸಂಖ್ಯೆ | ಚಾಲ್ತಿಯಲ್ಲಿರುವ ಒಟ್ಟು ವಾಹನಗಳು | 15ನೇ ಹಣಕಾಸು/ಡಿ.ಪಿ.ಆರ್ ಯೋಜನೆಯಲ್ಲಿ ಖರೀದಿಸಲಾಗಿರುವ ವಾಹನಗಳು ಮತ್ತು ಖರೀದಿ ಪ್ರಕ್ರಿಯೆಯಲ್ಲಿರುವ ವಾಹನಗಳು |
|---|---|---|---|---|
| 1 | 2 | 3 | 4 | 5 |
| 1 | AT 1.1 Cum | 67 | 59 | 0 |
| 2 | AT 2.5 Cum | 46 | 25 | 34 |
| 3 | Auto Tipper 3.5 Cum | - | 0 | 49 |
| 4 | Garbage Sucker | 2 | 0 | 0 |
| 5 | Tractor | 11 | 12 | 13 |
| 6 | Compactor | 11 | 11 | 11 |
| 7 | Tipper 6 Cum | 2 | 6 | 0 |
| 8 | Tipper Truck 8.5 Cum | 12 | 0 | 5 |
| 9 | Loader Backhoe | 2 | 4 | 0 |
| 10 | Mini Hitachi | - | 1 | 0 |
| 11 | Excavator 220 HP | 1 | 1 | 0 |
| 12 | Excavator 80 HP | 2 | 2 | 0 |
| 13 | Small Excavator 20 HP | 1 | 1 | 0 |
| | **Grand Total** | 157 | 122 | 112 |

ಆಯುಕ್ತರು
ಕಲಬುರಗಿ ಮಹಾನಗರ ಪಾಲಿಕೆ
ಕಲಬುರಗಿ